ಡಾ॥ ಪ್ರತಿಭಾ ಚಿಣ್ಣಪ್ಪ

# ಕರ್ನಾಟಕದಲ್ಲಿ ಬಲಿ – ಆತ್ಮತ್ಯಾಗ

ಬಲಿ ಎನ್ನುವ ಪದ್ಧತಿ ನಮ್ಮ ದೇಶದಲ್ಲಿ ಬಹಳ ಹಿಂದಣ ಕಾಲದಿಂದ ನಡೆದುಬಂದದ್ದು. ಆರ್ಯರ ಪೂರ್ವಜರು, ಆರ್ಯರು, ಇದನ್ನು ಅನುಸರಿಸು ತ್ತಿದ್ದರು. ಆರ್ಯ ಸಂಸ್ಕೃತಿಯು ಪ್ರಾಣಿ ಬಲಿಯನ್ನಷ್ಟೇ ಅಲ್ಲದೆ, ನರಮೇಧ ಯಾಗವನ್ನು ಸ್ವೀಕರಿಸಿತ್ತು. ಆದರೆ ಕಾಲಕ್ರಮೇಣ ಜೈನ, ಬೌದ್ಧ ಧರ್ಮಗಳ ಪ್ರಭಾವದಿಂದ ಬೆಳೆದು ಬಂದ ಹಿಂದೂಧರ್ಮದಲ್ಲಿ ಆ ಪದ್ಧತಿ ಮಾಯವಾಗುತ್ತಾ ಬಂದಿತು. ದೇವತೆಗೆ ರಕ್ತಲೇಪನಕ್ಕೆ ಬದಲಾಗಿ ಕುಂಕುಮ ಬಳಸಲಾಯಿತು. ಆದರೂ, ನೂರಾರು ವರ್ಷಗಳ ಇತಿಹಾಸದಲ್ಲಿ ಒಂದಲ್ಲ ಒಂದು ವಿಧದಲ್ಲಿ ಈ ಬಲಿಪದ್ಧತಿ ಕಂಡುಬರುತ್ತಲೇ ಇದೆ.

ಕರ್ನಾಟಕದಲ್ಲಿ ಈ ಸಂಪ್ರದಾಯ ಎರಡು ವಿಧದಲ್ಲಿ ಕಾಣುತ್ತದೆ. ಹಳ್ಳಿಯ ರಕ್ಷಣೆಗಾಗಿ ಪ್ರಾಣದ ಹಂಗು ತೊರೆದು ಹೋರಾಡುವ ವೀರಭದ್ರರು ದೊರೆಯ ರಕ್ಷಣೆಗಾಗಿ ತಮ್ಮ ಜೀವನವನ್ನು ಮುಡು ಪಾಗಿಟ್ಟ ವಚನಬದ್ಧ ಗರುಡರು, ಪುರುಷರು. ಅನೇಕರು ಭಕ್ತಿಯ ಆವೇಶದಲ್ಲಿ ಎಳೆಯುತ್ತಿರುವ ದೇವರ ರಥದ ಚಕ್ರದಡಿಗೆ ಬೀಳುತ್ತಿದ್ದರು. ಇಂಥವರ ಕಥೆಗಳನ್ನು ಸಾರಿ ಹೇಳುತ್ತವೆ ವೀರಗಲ್ಲುಗಳು. ವೀರಭದ್ರರು, ಗರುಡರು ಈ ಒಂದು ಕೆಲಸಕ್ಕಾಗಿಯೇ ನಿಯೋಜಿತ ರಾದವರು, ಸ್ವಇಚ್ಛೆಯಿಂದ ಪ್ರೇರೇಪಿತರಾದವರು, ಪ್ರಮಾಣಬದ್ಧರು. ಆದರೆ ನಿಸ್ಸಹಾಯಕಳಾದ ಸ್ತ್ರೀ ಸಮಾಜದ ಕಟ್ಟಳೆಗಳಿಗೆ ಬಾಗಬೇಕಾಗಿತ್ತು. ಚಿಕ್ಕ ಮಗು ವಿನಿಂದ ಸತಿಯಾಗುವುದಕ್ಕೆ ಮಾನಸಿಕವಾಗಿ ಸಿದ್ಧತೆ ನಡೆಸಲಾಗುತ್ತಿತ್ತು. ವಿಧವೆಯಾಗಿ ಬದುಕುವ ಆಸೆ ಇದ್ದರೆ ಮುಂದಿನ ಕಠೋರ, ದುಸ್ಸಹನೀಯ ಜೀವನದ ಅರಿವು ಎಂತಹ ಆಸೆಯನ್ನಾದರೂ ಚಿವುಟಿ ಬಿಡು ತ್ತಿತ್ತು. ಆಕೆಯು ಸಂಘಂ ಕಾಲದ ಸ್ತ್ರೀ ಆದರೇನು, ಮಧ್ಯಕಾಲೀನಳಾದರೇನು? ಮುಂದಿನ ಬದುಕಿನ ಸ್ಪಷ್ಟ ರೂಪ ಆಕೆಯ ನೋವಿನ ಮಾತುಗಳಲ್ಲಿ ಕರ್ನಾಟಕದ ಜಾನಪದ ಗೀತೆಗಳಲ್ಲಿ ಕೇಳಿ ಬರುತ್ತದೆ.[1]

**"ಗಂಡ ಸಾಯೋಕ್ಕಿಂತ ಮುಂಡೆಯಾಗೋಕ್ಕಿಂತ ಕಂಡೋರ ಮನೆಯ ಕಸಸ್ಯಾಕೆ – ಸಾಯೋಕಿಂತ ಕೊಂಡವನ್ನೇರೋದೆ ಕಡುಲೇಸು".**

ಆಕಸ್ಮಿಕವಾಗಿ ಭವಿಷ್ಯವೇ ಕಮರಿ ಹೋದಾಗ ಸಹಧರ್ಮಿಣಿ ಸ್ತ್ರೀ ಸಹಗಮನ ಮಾಡಿ ಸತಿಯಾಗುತ್ತಿ ದ್ದಳು. ಇವರುಗಳ ಆತ್ಮಬಲಿದಾನವನ್ನು ಮುಂದೆ ಬಂದ ಪೀಳಿಗೆಗಳು ವೀರಗಲ್ಲು ಸತಿಗಲ್ಲುಗಳ ಮೂಲಕ ಆರಾಧಿಸುತ್ತಿದ್ದರು.

ಮಧ್ಯಕಾಲೀನ ಯುಗದಲ್ಲಿ ಕರ್ನಾಟಕದಲ್ಲಿ ಇನ್ನೊಂದು ತೆರನಾದ ಪದ್ಧತಿಯು ಕಂಡುಬರುತ್ತದೆ. ಒಂದು ಪರಿಸ್ಥಿತಿಯನ್ನು ಸುಧಾರಿಸಲು ಅಥವಾ ಸಂಘ ಟನೆಯನ್ನು ಎದುರಿಸಲು ಆತ್ಮ ಬಲಿದಾನವು ನಡೆಯುತ್ತಿತ್ತು. ಮೆಕೆಂಜಿ[2] (ಮ್ಯಾನುಸ್ಕ್ರಿಪ್ಟ್‌ನಲ್ಲಿ), ಸ್ಥಳೀಯ ದಾಖಲೆಗಳಲ್ಲಿ ಸ್ವೀಕರಿಸಿರುವ ಶಾಸನಗಳಲ್ಲಿ ಇಂಥ ಘಟನೆಗಳು ಕಂಡುಬರುತ್ತವೆ. ಹಳ್ಳಿಯ ಕೆರೆ ತುಂಬಿ ಕೋಡಿ ಹರಿಯುವ ಪರಿಸ್ಥಿತಿ ಬಂದಾಗ ಆವೂರ ರೆಡ್ಡಿಯ ಸ್ವಪ್ನದಲ್ಲಿ ದೇವತೆ ಕಂಡು ನರಬಲಿ ಕೋರಿದಳಂತೆ. ದೇವತೆಯತೃಪ್ತಿ ಗಾಗಿ ಇಬ್ಬರು ಸಾಲಂಕೃತ ಕನ್ಯೆಯರನ್ನು (ಅಕ್ಕ ತಂಗಿಯರನ್ನು) ದಡದ ಮೇಲೆ ಸಜೀವ ಸಮಾಧಿ ಮಾಡಿ ಪ್ರಮಾದ ದಿಂದ ತಪ್ಪಿಸಿಕೊಂಡರು. ಕೆಂಪೇಗೌಡನ ಸೊಸೆಯ ಕಥೆ ಎಲ್ಲರಿಗೂ ಗೊತ್ತಿರುವುದೇ. ಯಾರೂ ಆಕೆಯನ್ನು ಬಲವಂತಪಡಿಸಲಿಲ್ಲ. ಆದರೆ ಗರ್ಭಿಣಿಯ ಬಲಿಯೇ ಬೇಕೆಂದಾಗ ಆ ತುಂಬುಗರ್ಭಿಣಿ ಗೌಡನ ಸೊಸೆ ಇನ್ನೇನು ತಾನೆ ಮಾಡಿಯಾಳು? ಮಾನಸಿಕ ಒತ್ತಡ, ಪರಿಸ್ಥಿಯ ಒತ್ತಡ, ಆಕೆಯನ್ನು ಈ ಕೆಲಸಕ್ಕೆ ಪ್ರೇರೇಪಿ ಸಿತು. ಭ್ರೂಣಹತ್ಯೆ ಮಹಾಪಾಪವೆಂದು ಒಪ್ಪಿಕೊಂಡ ಸಮಾಜವೇ ಈ ವಿಧವಾದ ನಂಬಿಕೆ ಇಟ್ಟುಕೊಂಡಾಗ ಆ ಮೌಢ್ಯಕ್ಕೆ ಬಲಿಯಾದಳು ಗೌಡನ ಸೊಸೆ.

ಇಂತಹ ಕಷ್ಟದ ಪರಿಸ್ಥಿತಿಯನ್ನು ನಿವಾರಿಸಲು ಇನ್ನೊಬ್ಬರ ಪ್ರಾಣವನ್ನು ಬಲಿಕೊಡದೆ ತನ್ನನ್ನೇ ಅರ್ಪಿಸಿಕೊಳ್ಳಲು ಮುಂದಾದವನು ನೃಪತುಂಗನೂ

ಬ್ಬನೇ. ಆದರೆ, ಉಳಿದೆಲ್ಲ ಉದಾಹರಣೆಗಳಲ್ಲಿ ನಮಗೆ ಕಾಣಸಿಗುವುದು ಅಮಾಯಕ ಸ್ತ್ರೀಯ ಬಲಿದಾನವೇ. ಈ ಹುಡುಗಿಯರಿಗೆ ಶತ್ರುಗಳಿಂದ ಮಾನರಕ್ಷಣೆಗಾಗಿ ಜೊಹರ ಹೋಗುವ ಅವಶ್ಯಕತೆ ಇರಲಿಲ್ಲ. ಅವರು ಸತಿಗಳಾಗುವ ಪರಿಸ್ಥಿತಿಯೂ ಇರಲಿಲ್ಲ. ಕೆಲವೆಡೆ ಅವರಿನ್ನೂ ಕನ್ಯೆಯರು. ಈ ರೀತಿಯ ಬಲಿದಾನವು ಸಮಾಜದ ಕ್ಷೇಮಕ್ಕೋಸ್ಕರ ಎನ್ನವುದೇನೋ ಸರಿ. ಆದರೆ ಕೋಟೆ ಬಾಗಿಲು ನಿಲ್ಲದಿರುವುದಕ್ಕೆ ಯಾರು ಹೊಣೆ? ಸೋಜಿಗವೆಂದರೆ ಇಂತಹ ಬಲಿದಾನಕ್ಕೆ ಕನ್ಯೆಯರು ಅಥವ ಯುವತಿಯರನ್ನು ಮಾತ್ರವೇ ಕೊಡಲಾಗುತ್ತಿತ್ತು. ಜೀವನವು ವಿಕಸಿಸುವ ಮೊದಲೇ ಅಂಥವರನ್ನು ಚಿವುಟಿಹಾಕಲಾಗುತ್ತಿತ್ತು. ಬಲಿದಾನವಾಗಬೇಕಾದಾಗ ಊರ ಮುಖ್ಯಸ್ಥನೇಕೆ ಮುಂದಾಗುವುದಿಲ್ಲ? ಜೋಯಿಸನೇಕೆ ಹೋಗುವುದಿಲ್ಲ? ಊರವರ್ತಕನೋ, ಬೇಸಾಯಗಾರನೋ ಏಕೆ ಮುಂದಾಗುವುದಿಲ್ಲ? ಇವರೆಲ್ಲರು ಸಮಾಜಕ್ಕೆ ಬೇಕಾದವರು. ಬೇಡವಾದವಳು ಹೆಣ್ಣು ತಾನೆ? ಈ ಸಂದರ್ಭದಲ್ಲಿ ಕೆರೆಗೆ ಹಾರ'ವೆಂಬ ಜಾನಪದ ಗೀತೆ ನಮ್ಮ ಕಣ್ಣಮುಂದೆ ಎದ್ದು ನಿಲ್ಲುತ್ತದೆ. ಸಣ್ಣ ಸೊಸೆ ಭಾಗೀರಥಿಯನ್ನು ಕೆರೆಗೆಹಾರವಾಗಿ ಕೊಟ್ಟರು. ಭಾಗೀರಥಿಯ ಕಥೇ ಇತಿಹಾಸದ ಘಟನೆಯೇ ಅಲ್ಲವೋ ಅನ್ನುವುದು ಮುಖ್ಯವಲ್ಲ.[3] ಜಾನಪದ ಸಾಹಿತ್ಯ ವ್ಯಕ್ತಿಗತ ಐತಿಹಾಸಿಕ ಘಟನೆಗಳ ನಿರೂಪಣೆಗಿಂತ ಆಯಾ ಕಾಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಪಟಚಿತ್ರವಾಗಿರುತ್ತದೆ. ಕೆರಗೆ ಹಾರವನ್ನಾಗಿ ಕೊಡಲು ಭಾಗೀರಥಿಯನ್ನೇನು ಯಾರೂ ಕೇಳಲಿಲ್ಲಿ. ಹಿರಿಯರು ನಿಶ್ಚಯಿಸಿ ಬಿಟ್ಟರು. ಹಿರಿಯ ಸೊಸೆಯರನ್ನು ಕೇಳುವುದು ಒಂದುನೆಪವಷ್ಟೆ. ಜಳಕ ಮಾಡುವುದಕ್ಕೆ ನಿಂಗವ್ವ ನೀಲವ್ವ ನಾವೊಲ್ಲೆ ನಾವೊಲ್ಲೆ ಎಂದಾಗ, ಸಣ್ಣ ಸೊಸೆ ಭಾಗವ್ವ ನೀನಾದರೂ ಜಳಕ ಮಾಡು ಎಂದು ಅತ್ತೆಮಾವಂದಿರೆಂದಾಗ ಇನ್ನೇನು ತಾನೆ ಮಾಡಿಯಾಳು? ಇಲ್ಲಿ ಎಷ್ಟೊಂದು ಮುಚ್ಚು ಮರೆ. ಕಡೆಗೆ ಗಂಗೆಪೂಜೆ ಆಗಿ ಕೆರೆದಂಡೆ ಏರಿ ಬಂದ ಮೇಲೆ ಒಂದು ಬಂಗಾರದ ಬಟ್ಟಲು ಬಿಟ್ಟು ಬಂದ ನೆನಪು. ಆಗಲೂ ಗಂಗವ್ವ ಹೋಗಲಿಲ್ಲ, ಗವರವ್ವ ಹೋಗಲಿಲ್ಲ, ನಿಂಗವ್ವ ಹೋಗಲಿಲ್ಲ, ನೀಲವ್ವ ಹೋಗಲಿಲ್ಲ. ಸಣ್ಣಸೊಸೆ ಭಾಗೀರಥಿಯೇ ಕೆರೆಗೆ ಹಾರವಾಗುವುದಕ್ಕೆ ಹೋಗಬೇಕಾಗಿ ಬಂತು ಇಲ್ಲಿ (ಭಾಗೀರಥಿಯದು ಆತ್ಮತ್ಯಾಗವಲ್ಲ, ಬಲಿ). ಆ ಕಾಲದ ಸಮಾಜದ ಹಿರಿಮೆ ಏನೇ ಇದ್ದರೂ ಅದು ಇಂತಹ ಆಚರಣೆಗಳಿಂದ ಕಿರಿದಾಗಿ ಹೋಗುತ್ತವೆ. ಭಯದಿಂದ ಆ ಸಣ್ಣ ಹುಡುಗಿ ನಿಸ್ಸಹಾಯಳಾಗಿ ತವರಿಗೆ ಬಂದಾಗ ಗೆಳತಿಯ ಸಾಂತ್ವನ ಇಟ್ಟಾಂಗ ಇರಬೇಕುಹೌದು, ಸ್ತ್ರೀ ಇಟ್ಟಾಂಗ ಇರಬೇಕು. ಕೊಟ್ಟರೆ ಕೆರೆಗೆ ಹಾರಹೋಗಬೇಕು. ಬಲಿದಾನದ ಘಟನೆಗಳಲ್ಲಿ, ಈ ರೀತಿಯ ಪ್ರಾಣಾರ್ಪಣೆ ಮಾಡುವವರ ಮಾನಸಿಕ ಸ್ಥಿತಿಯ ಕೆರೆಗೆ ಹಾರ ಎನ್ನುವ ಜಾನಪದ ಗೀತೆಯ ಹೊರತು, ಬೇರೆಲ್ಲೂ ಗೋಚರವಾಗುವುದಿಲ್ಲ. ಜಾನಪದ ಕವಿ ಮನಸೊಂದು ಬರೆದಿರುವುದು ಭಾಗೀರಥಿಯ ಆತ್ಮತ್ಯಾಗವನ್ನಲ್ಲ, ಆಕೆಯ ಕೊಲೆಯನ್ನು.

ನಮ್ಮ ಸಂಸ್ಕೃತಿಯನ್ನು ಹೊಗಳಿಕೊಳ್ಳುವಾಗ ಅದರ ಹಿಂದಣದ ಕಪ್ಪು ಛಾಯೆಯನ್ನು ಸುಲಭವಾಗಿ ಮರೆತು ಬಿಡುತ್ತೇವೆ. ಮುಳ್ಳು ಚುಚ್ಚಿದರೆ ತಡೆಯಲಾರದ ನಮಗೆ ಮೆಲ್ಲಮೆಲ್ಲನೆ ತಣ್ಣನೆ ನೀರು ಮೇಲೇರುತ್ತಿದ್ದರೆ, ಉರಿಯುವ ಬೆಂಕಿ ಹತ್ತಿರ ವಾಗುತ್ತಿದ್ದರೆ, ಆ ಬಲಿಗೀಡಾದವರ ಭಯೋದ್ವೇಗ ಗಳನ್ನು ಊಹಿಸಲು ಕಷ್ಟವೇ? ನಮ್ಮಲ್ಲಿದ್ದ, ನಮ್ಮ ಮನಸ್ಸನಲ್ಲಿ . ಇನ್ನೂ ಇರುವ ಈ ಕಪ್ಪು ಕಲೆಯನ್ನು ಆತ್ಮ ತ್ಯಾಗವೆಂದುಕೊಳ್ಳುವುದು, ಅದನ್ನು ಹೊಗಳಿಕೊಳ್ಳುವುದು ಆತ್ಮ ವಂಚನೆ. ಇದು ಬಲಿ, ಸಾಮಾಜಿಕ ಆತ್ಮ ವಂಚನೆ (ಸೋಶಿಯಲ್ ವಿಕ್ಟಿಮೈಜೇಶನ್) ಮೂಕ ಪಶುಗಳನ್ನು ದೇವರಿಗೆ ಬಲಿಕೊಡುವುದು ಎಷ್ಟು ಶ್ಲಾಘನೀಯವೋ ಅದು ಅಷ್ಟೆ. ಯಾರು ಏತಕ್ಕಾಗಿ ಮಾಡಿದರೇನಂತೆ, ಅದು ಖಂಡನೀಯ, ಅಮಾನುಷ.

---

1. ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ, ಡಾ॥ ದೇವೇಂದ್ರ ಕುಮಾರ ಹಕಾರಿ,ಪು. 242. ;
2. ಮೆಕೆಂಜೀ ಮ್ಯಾನ್ಯುಸ್ಕ್ರಿಪ್ಟ್ - ಸಂ.8, ಅನ್‌ಡೇಟೆಡ್ ಇನ್ಸ್‌ಕ್ರಿಪ್‌ಶನ್ಸ್ ಫ್ರಾಂ ವೇಲೂರು-ಬ್ರಹ್ಮರೆಡ್ಡಿ.
3. ಕೆರೆಗೆ ಹಾರ - ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ - ಪು.254.